# ವೀವೆಟಿಗೆ

ವಾರಪತ್ರಿಕೆ, ಸಂಪಾದಕ: ಸಿರಿಮನೆ ನಾಗರಾಜ್.





ಪ್ರಾಯೋಗಿಕ ಸಂಚಿಕೆ ೬ | ಕೊಪ್ಪ ೧೪–೨–೮೨ ಭಾನುವಾರ | ಖಾಸಗಿ ಪ್ರಸಾರಕ್ಕಾಗಿ


## ಶಂಭಯ್ಯನ ಸಾವಿನ ತನಿಖೆ: ಮುಖ್ಯಮಂತ್ರಿ ಭರವಸೆ

ಬೆಂಗಳೂರು: ಶಂಭಯ್ಯನ ಸಾವಿಗೆ ಸಂಬಂಧಪಟ್ಟಂತೆ ಸರ್ಕಾರ ನಿಷ್ಪಕ್ಷಪಾತ ತನಿಖೆ ನಡೆಸಿ, ತಪ್ಪಿತಸ್ಥರನ್ನು ಯಾವ ಹಿಂಜರಿಕೆಯಿಲ್ಲದೆ ಶಿಕ್ಷಿಸುವುದೆಂದು ಮುಖ್ಯಮಂತ್ರಿ ಗುಂಡೂರಾವ್ ಫೆ. ೧೦ ರಂದು ವಿಧಾನ ಸಭೆಯಲ್ಲಿ ಭರವಸೆ ಕೊಟ್ಟಿದ್ದಾಗಿ ವರದಿಯಾಗಿದೆ.

ಹಲವಾರು ಜನ ಶಾಸಕರು ಈ ಬಗ್ಗೆ ಕಳಿಸಿದ್ದ ಗಮನ ಸೆಳೆವ ಸೂಚನೆಗೆ ಅವರು ಉತ್ತರ ಕೊಡುತ್ತ, ನಾಗರೀಕ ಹಕ್ಕು ಜಾರಿ ವಿಭಾಗದ ಡಿ. ಐ. ಜಿ. ಕೊಲಾಸೊ ಅವರ ತನಿಖೆಯ ಕ್ರಮದ ಬಗ್ಗೆ ಸಾರ್ವಜನಿಕ ಮತ್ತು ಹರಿಜನ ಮುಖಂಡರಿಂದ ಟೀಕೆಗಳು ಬಂದ ಕಾರಣ ಚಿಕ್ಕಮಗಳೂರು ಉಪವಿಭಾಗಾಧಿಕಾರಿಯವರಿಗೆ ತನಿಖೆ ನಡೆಸಿ ವರದಿ ಕಳಿಸಲು ಆದೇಶಿಸಲಾಗಿದೆ ಎಂದು ತಿಳಿಸಿದರು.

ಪ್ರಕರಣದ ನ್ಯಾಯಾಂಗ ತನಿಖೆಗೆ ಒತ್ತಾಯಿಸಿ ಚಿಕ್ಕಮಗಳೂರಿನ ಸಂಯುಕ್ತ ಹೋರಾಟ ಸಮಿತಿ ಫೆ. ೧೬ ಮತ್ತು ೧೯ ರಂದು ಜಿಲ್ಲಾಧಿಕಾರಿ ಮತ್ತು ತಾ|| ಕಛೇರಿಗಳ ಮುಂದೆ ನಡೆಸಲು ತೀರ್ಮಾನಿಸಿದ್ದ ಉಪವಾಸ ಮತ್ತು ಧರಣಿ ಸತ್ಯಾಗ್ರಹಗಳನ್ನು ಮುಂದೂಡಲಾಗಿದೆ.

ಅನಾಥವಾಗಿರುವ ಶಂಭಯ್ಯನ ಕುಟುಂಬಕ್ಕೆ ತಕ್ಷಣ ಪರಿಹಾರ ದೊರಕಿಸಲು ಕೋರಿ ಮುಖ್ಯ ಮಂತ್ರಿಗೆ ರಾಜ್ಯ ಜನತಾ ಪಕ್ಷದ ಅಧ್ಯಕ್ಷ ಬೊಮ್ಮಾಯಿ ಪತ್ರ ಬರೆದಿದ್ದಾರೆಂದೂ ವರದಿಯಾಗಿದೆ.

### ಪದಾಧಿಕಾರಿಗಳ ಆಯ್ಕೆ

ನರಸಿಂಹರಾಜಪುರ: ಸ್ಥಳೀಯ ಹವ್ಯಾಸಿ ಕಲಾವಿದರ ಬಳಗವಾದ 'ಸಪ್ತಶ್ರೀ ಹವ್ಯಾಸಿ ರಂಗ'ಕ್ಕೆ ನಾರಾಯಣಸ್ವಾಮಿ (ಅಧ್ಯಕ್ಷ), ಸಿ.ಟಿ. ಜಗದೀಶ್ (ಉಪಾಧ್ಯಕ್ಷ), ಬಿ.ಎನ್ ಜ್ವಾಲನಪ್ಪ (ಕಾರ್ಯದರ್ಶಿ), ಕೆ. ಗಣಪತಿ (ಸಂಘಟನಾ ಕಾರ್ಯದರ್ಶಿ), ಪ್ರಭಾಕರ (ಸಹ ಕಾರ್ಯದರ್ಶಿ), ಎ. ರಘುಪತಿತುಂಗ (ಖಜಾಂಚಿ), ಇವರು ಪದಾಧಿಕಾರಿಗಳಾಗಿ ಆಯ್ಕೆಯಾಗಿದ್ದಾರೆ. ಜೊತೆಗೆ ಐವರು ಸದಸ್ಯರ ಕಾರ್ಯಕಾರಿ ಸಮಿತಿಯನ್ನೂ ಆರಿಸಲಾಗಿದೆ.

### ಅಗ್ರಹಾರದಲ್ಲಿ ನೂತನ ಅಂಚೆ ಕಚೇರಿ

ಫೆ. ೮ರಂದು ಇಲ್ಲಿನ ಅಗ್ರಹಾರದಲ್ಲಿ ಇಲಾಖಾ ಉಪ ಅಂಚೆ ಕಚೇರಿಯೊಂದನ್ನು ಅಂಚೆ ಉಪ ವಿಭಾಗ ಇನ್ಸ್‌ಪೆಕ್ಟರ್ ಕೆ. ಕೆ. ನಾಯಕ್ ಉದ್ಘಾಟಿಸಿದರು.

### ಬಸವಾನಿಯಲ್ಲಿ ವಾಲಿಬಾಲ್ ಟೂರ್ನಿ

ಬಸವಾನಿ: ಫೆ. ೨೭ ಮತ್ತು ೨೮ರಂದು ಇಲ್ಲಿನ ಗ್ರಾಮಪಂಚಾಯಿತಿ, ಯುವಕರೈತ ಸಂಘ ಮತ್ತು ಯುವತಿ ಮಂಡಲಿ– ಇವರ ಸಂಯುಕ್ತ ಆಶ್ರಯದಲ್ಲಿ ಶ್ರೀಮತಿ ಮತ್ತು ಶ್ರೀ ಕೊಳಾವರ ತಿಮ್ಮಣ್ಣಗೌಡರ ಸ್ಮಾರಕ ಶಿವಮೊಗ್ಗ ಮತ್ತು ಚಿಕ್ಕಮಗಳೂರು ಜಿಲ್ಲಾ ಮಟ್ಟದ ಪುರುಷರ ವಾಲಿಬಾಲ್ ಮತ್ತು ಮಹಿಳೆಯರ ಥ್ರೋಬಾಲ್ ನಿರಂತರ ಪರ್ಯಾಯ ಫಲಕ ಟೂರ್ನಿಯನ್ನು ಏರ್ಪಡಿಸಲಾಗಿದೆ. ಸ್ಪರ್ಧೆಯ ತಂಡಗಳು ದಿನಾಂಕ ೨೦–೨–೮೨ರ ಒಳಗಾಗಿ ಪ್ರವೇಶ ಶುಲ್ಕ ೧೫–೦೦ರೂ. ಗಳೊಂದಿಗೆ ಪ್ರವೇಶ ಪತ್ರವನ್ನು ಎ. ಉಮೇಶ್, ಕಾರ್ಯದರ್ಶಿ, ಯುವಕ ರೈತಸಂಘ ಬಸವಾನಿ, ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗಾ ಜಿಲ್ಲೆ. ಈ ವಿಳಾಸಕ್ಕೆ ನೋಂದಾಯಿಸಿಕೊಳ್ಳಬೇಕೆಂದು ವ್ಯವಸ್ಥಾಪಕರು ತಿಳಿಸಿದ್ದಾರೆ.

### ವಿದ್ಯುತ್ ಸರಬರಾಜು ಅವ್ಯವಸ್ಥೆ: ಸಾರ್ವಜನಿಕ ಸಭೆ ಯತ್ನ

ಕೊಪ್ಪ: ಈ ಪ್ರದೇಶದಲ್ಲಿ ಈಗ್ಗೆ ಹಲವಾರು ದಿನಗಳಿಂದಲೂ ವಿದ್ಯುಚ್ಛಕ್ತಿ ಸರಬರಾಜು ತೀರ ಅಸ್ತವ್ಯಸ್ತಗೊಂಡಿರುವುದರ ಬಗ್ಗೆ ಹಾಗೂ ಮೀಟರ್ ಡಿಪಾಜಿಟ್ ಬಗ್ಗೆ ಚರ್ಚಿಸಿ ಇದರಿಂದಾಗುತ್ತಿರುವ ಅನನುಕೂಲಗಳನ್ನು ಇಲಾಖೆ ಮತ್ತು ಸರ್ಕಾರಕ್ಕೆ ಮನವರಿಕೆಮಾಡಿಕೊಡುವುದಕ್ಕಾಗಿ ಸಾರ್ವಜನಿಕ ಸಭೆಯೊಂದನ್ನು ವ್ಯವಸ್ಥೆಗೊಳಿಸಲು ಪ್ರಯತ್ನ ನಡೆಯುತ್ತಿರುವುದಾಗಿ ತಿಳಿದು ಬಂದಿದೆ.

ಈ ಸಭೆಗೆ ಈ ಪ್ರದೇಶದ ನಾಗರೀಕ ಮತ್ತು ರಾಜಕೀಯ ಪ್ರಮುಖರನ್ನೂ ಇಲಾಖೆಯ ಅಧಿಕಾರಿಗಳನ್ನೂ ಆಹ್ವಾನಿಸುವ ಸಂಭವವಿದೆಯೆಂದೂ ಗೊತ್ತಾಗಿದೆ.

### ಕಿಗ್ಗ ಪ್ರೌಢಶಾಲೆಯ ಹೊಸ ಕಟ್ಟಡಕ್ಕೆ ಅಡಿಗಲ್ಲು

ಕಿಗ್ಗ: ಇಲ್ಲಿನ ಶ್ರೀ ಅಭಿನವ ರಾಮಾನಂದ ಪ್ರೌಢಶಾಲೆಗಾಗಿ ಕಟ್ಟಲು ಉದ್ದೇಶಿಸಿರುವ ಹೊಸ ಕಟ್ಟಡದ ಶಂಕು ಸ್ಥಾಪನೆ ಜ. ೩೦ ರಂದು ಹರಿಹರಪುರದ ಗುರುಗಳ ಸಮ್ಮುಖದಲ್ಲಿ ನೆರವೇರಿತು.

ಶಾಲಾ ಕಟ್ಟಡಕ್ಕಾಗಿ ಗುರುಗಳು ಒಂದು ಸಾವಿರ ರೂ. ನೀಡಿದರು.

ಕೆ. ಸಿ. ಶಿವಶಂಕರ ರಾವ್ ತಮ್ಮ ತಾಯಿಯ ಹೆಸರಿನಲ್ಲಿ ಎರಡು ಸಾವಿರ ರೂ. ನೀಡಿದರು. ಕೋಣಿನಬೈಲು ಮಂಜಪ್ಪ ನಾಯ್ಕ ತಮ್ಮ ತಂದೆಯ ಹೆಸರಲ್ಲಿ ಒಂದು ಕೊಠಡಿ ಕಟ್ಟಿಸುವ ವಾಗ್ದಾನ ಮಾಡಿದರು. ಶಾಲಾ ಸಮಿತಿಯ ಸದಸ್ಯರಾದ ಜಿ. ಸಿ. ಗಿರಿಯಪ್ಪಗೌಡರು ಕಟ್ಟಡಕ್ಕೆ ಉದಾರವಾಗಿ ವಂತಿಗೆ ಕೊಡುವಂತೆ ಊರ ಪ್ರಮುಖರಲ್ಲಿ ವಿನಂತಿಸಿದರು.

ಸಮಾರಂಭದ ಅಧ್ಯಕ್ಷತೆಯನ್ನು ಪಂಚಾಯ್ತಿ ಅಧ್ಯಕ್ಷ ಕೆ. ಸಿ. ಪ್ರೇಮನಾಥ್ ವಹಿಸಿದ್ದರು. ಬಿ. ಕೆ. ಶೇಷಾದ್ರಿಯಪ್ಪ ಸ್ವಾಗತಿಸಿದರು. ಶಾಲಾ ಮುಖ್ಯೋಪಾಧ್ಯಾಯ ವೇದವ್ಯಾಸಾಚಾರ್ ವಂದಿಸಿದರು

## ಕೊಪ್ಪದ ಮಡಿಲು ಚಿನ್ನದ ತವರು?

**ಕೊಪ್ಪ ಮತ್ತು ಸುತ್ತಮುತ್ತ ಚಿನ್ನ ಮುಂತಾದ ಖನಿಜಗಳು ದೊರೆಯುವ ಸಾಧ್ಯತೆ ಇದೆಯೇ?**

**"ಇದೆ" ಎನ್ನುತ್ತಾರೆ ತರುಣ ಭೂಗರ್ಭ ವಿಜ್ಞಾನಿ ದೇಬಶೀಶ್ ರಾಯ್.**

ಖನಿಜಗಳ ಶೋಧದ ಉದ್ದೇಶದಿಂದ ಕೊಪ್ಪ ಮತ್ತು ಸುತ್ತಮುತ್ತಲ ೩೯೦ ಚದರ ಕಿ. ಮೀ. ಪ್ರದೇಶದ ಭೂ ರಚನೆಯನ್ನು ವಿವರವಾಗಿ ಅಭ್ಯಾಸ ಮಾಡಿ ಕ್ರಮಬದ್ಧವಾದ ನಕಾಶೆ ತಯಾರಿಸುವುದರಲ್ಲಿ ಅವರ ತಂಡ ಈಗ ಮಗ್ನ.

### ವ್ಯಾಪಕ ಶೋಧನೆ

ಭಾರತೀಯ ಭೂ ವಿಜ್ಞಾನ ಸರ್ವೆಯು ದಕ್ಷಿಣ ಕರ್ನಾಟಕದ ಎಲ್ಲೆಡೆ ವಿವಿಧ ಖನಿಜಗಳಿಗಾಗಿ ಕೈಗೊಂಡಿರುವ ವ್ಯಾಪಕ ಶೋಧನೆ ಕಾರ್ಯಾಚರಣೆಯ ಅಂಗವಾಗಿ ಈ ಪ್ರದೇಶದಲ್ಲಿ ಶೋಧನೆ ನಡೆಸುತ್ತಿರುವ ತಂಡದ ಪ್ರಮುಖರಾದ ರಾಯ್, ಈಗಾಗಲೇ ಕೆಲವು ಪ್ರಾರಂಭಿಕ ಹಂತದ ಫಲಿತಾಂಶಗಳನ್ನು ಪಡೆದಿದ್ದಾರೆ. ಒಂದೂವರೆ ಎರಡು ತಿಂಗಳಷ್ಟು ಕಾಲ ಮಾತ್ರ ಶೋಧನೆ ಕಾರ್ಯ ನಡೆದಿದ್ದು ಇನ್ನೂ ವ್ಯಾಪಕ ಶೋಧನೆ ಆಗಬೇಕಾಗಿದೆ.

### ಭೂ ರಚನೆ

ಪ್ರಾರಂಭಿಕ ಹಂತದ ಪ್ರಯೋಗಗಳ ಆಧಾರದ ಮೇಲೆ ಅವರು ಈ ಪ್ರದೇಶ 'ಕರ್ನಾಟಕ ಕ್ರೇಟನ್' ಎಂದು ಕರೆಯಲ್ಪಡುವ ಗುಂಪಿಗೆ ಸೇರಿದ್ದೆಂದು ಅಭಿಪ್ರಾಯಪಟ್ಟಿದ್ದಾರೆ. ಅಂದರೆ ಇದು ಪ್ರಪಂಚದಲ್ಲೇ ಅತ್ಯಂತ ಗಟ್ಟಿಯಾದ (ಸ್ಥಿರವಾದ) ಭೂ ರಚನೆಯನ್ನು ಹೊಂದಿದೆ. ಇಲ್ಲಿನ ಬಂಡೆಗಳು **೨೫೦–೩೫೦ ಕೋಟಿ** ವರ್ಷಗಳ ಹಿಂದೆ ಉಂಟಾದಂಥವು! ಅಂದರೆ ಭೂಮಿಯಲ್ಲಿ ಈವರೆಗೆ ಪತ್ತೆಯಾಗಿರುವ ಮಾದರಿಗಳಲ್ಲೇ ಅತ್ಯಂತ ಹಳೆಯವು. ಇವುಗಳ 'ಸಮಕಾಲೀನ' ಮಾದರಿಗಳು ಕೆನಡಾ, ಗ್ರೀನ್ ಲ್ಯಾಂಡ್ ಮತ್ತು ದ. ಆಫ್ರಿಕಗಳಲ್ಲಿ ಮಾತ್ರ ದೊರೆತಿವೆ.

'ಧಾರವಾಡ' ಗುಂಪಿಗೆ ಸೇರಿದ ಈ ಥರದ ಬಂಡೆಗಳು ಚಿನ್ನ, ತಾಮ್ರ, ನಿಕ್ಕಲ್ ಮತ್ತು ಪ್ಲಾಟಿನಂ ಗುಂಪಿನ ಖನಿಜಗಳಿಗೆ ತವರು. ಆದ್ದರಿಂದಲೇ ಇಲ್ಲೂ ಈ ಖನಿಜಗಳೇನಾದರೂ ಇವೆಯೇ ಎಂದು ಪತ್ತೆ ಹಚ್ಚಲು ಈ ವಿಜ್ಞಾನಿಗಳ ತಂಡ ತೀವ್ರ ಶೋಧನೆಯಲ್ಲಿ ನಿರತವಾಗಿದೆ.

### ನಿಖರವಾಗಿ....

ರಾಯ್ ಮತ್ತು ಅವರ ತಂಡದ ಶೋಧನೆಯಂತೆ, ಈ ಪ್ರದೇಶದಲ್ಲಿ ಚಿನ್ನ, ನಿಕ್ಕಲ್, ತಾಮ್ರ ಮುಂತಾದ ಬೆಲೆ ಬಾಳುವ ಖನಿಜಗಳು ಸಿಗುವ ಸಾಧ್ಯತೆ ಇದೆ. ಆದರೆ, ಅವು ಯಾವ ರೂಪದಲ್ಲಿ, ಯಾವ ಪ್ರಮಾಣದಲ್ಲಿ ಸಿಗಬಹುದು, ಅವುಗಳ ಅದಿರು [illegible] ಸಂಸ್ಕರಿಸುವುದು ಲಾಭದಾಯಕವಾಗ ಬಹುದೇ ಇಲ್ಲವೇ–ಮುಂತಾದ ವಿವರಗಳನ್ನು ನಿಖರವಾಗಿ ನಿರ್ಧರಿಸ ಬೇಕಾಗಿದೆ. ಅದಕ್ಕಾಗಿ ಈ ತಂಡ ಇನ್ನೂ ಹಲವಾರು ತಿಂಗಳ ಕಾಲ ಈ ಪ್ರದೇಶದ ವಿವರವಾದ ಸರ್ವೆ ಮುಂದುವರಿಸುತ್ತದೆ.

ಇದಲ್ಲದೆ ಇಲ್ಲಿ ರತ್ನದ ಕಲ್ಲುಗಳು (ಜೆಮ್ ಸ್ಟೋನ್ಸ್) ದೊರೆಯುವ ಸಾಧ್ಯತೆಯೂ ಇದೆ ಎನ್ನುತ್ತಾರೆ ರಾಯ್.

### ಬರಲಿವೆ ಗಣಿಗಳು......?

ಈ ಲೋಹಗಳು ಇಲ್ಲಿ [illegible] ಪ್ರಮಾಣದಲ್ಲಿ ದೊರೆಯುತ್ತವೆ [illegible] ಮಾದರೆ ಅದಿರು ತೆಗೆಯುವ ಕೆಲಸ [illegible] [illegible] ಆಗುವುದು. ಅದಿರು ಸಂಸ್ಕರಿಸಲು ಬೇಕಾದ ತಂತ್ರಜ್ಞಾನ ಭಾರತದಲ್ಲೇ ಲಭ್ಯವಿದೆ ಎಂದೂ ರಾಯ್ 'ಚಿನ [illegible]'ಗೆ ತಿಳಿಸಿದರು.


[ ಇನ್ನಷ್ಟು ವಿವರ ೩ನೇ ಪುಟದಲ್ಲಿ ]

# ಹತಾಶ

—ಶಂಕರ್ ಬಾಗೇವಾಡಿ, ಕೊಪ್ಪ

[ಕೊಪ್ಪ ತಾ|| ಯುವಜನ ಮೇಳದಲ್ಲಿ ಮೊದಲ ಬಹುಮಾನ ಪಡೆದ ಕತೆ.]

ಬೆಳಿಗ್ಗೆ ಮುಂಚೆ ಎದ್ದಾಗ ರವಿಯ ಮನಸ್ಸಿನಲ್ಲಿ ಒಂದು ರೀತಿಯ ಉತ್ಸಾಹ ತುಂಬಿತ್ತು. ನಿತ್ಯಕರ್ಮಗಳನ್ನೆಲ್ಲಾ ಮುಗಿಸಿ ತನ್ನ ಕೋಣೆ ಹೊಕ್ಕ. ಟೇಬಲ್ ಮೇಲೆ ತನಗಾಗಿ ಕಾದಿದ್ದ ಹಸಿರು ಫೈಲನ್ನು ಒಮ್ಮೆ ದಿಟ್ಟಿಸಿ, ಮನದಲ್ಲೆ ನಸುನಕ್ಕು ಬಗಲಿಗೆ ಸಿಕ್ಕಿಸಿಕೊಂಡು ನಡು ಮನೆಗೆ ಬಂದಾಗ ಶಾರದಮ್ಮ ಅಲ್ಲೇ ನಿಂತಿದ್ದನ್ನು ಕಂಡು ನಿಧಾನವಾಗಿ ಅವರ ಬಳಿ ಹೋಗಿ ಕಾಲಿಗೆ ನಮಸ್ಕರಿಸಿ, "ನಾನ್ ಬರ್ತೀನಮ್ಮ" ಎಂದ.

"ಹೋಗ್ಬಾರಪ್ಪ. ಆ ರಂಗನಾಥನ ದಯೆಯಿಂದ ಒಳ್ಳೆದಾದ್ರೆ ಸಾಕು" ಎಂದು ಮಗನನ್ನು ಆಶೀರ್ವದಿಸುವಾಗ ಶಾರದಮ್ಮನವರ ಕಂಠ ದುಃಖದಿಂದ ಭಾರವಾಗಿತ್ತು. ಅವರ ಸ್ವಭಾವವೇ ಹಾಗೆ. ಎಲ್ಲವನ್ನೂ ಕುಲದೇವತೆ ಚಿಕ್ಕಗಿರಿ ರಂಗನಾಥನ ಮೇಲೆ ಹೊರಿಸಿ ಸಮಾಧಾನ ತಂದು ಕೊಳ್ಳುತ್ತಿದ್ದರು.

ನಡುಮನೆ ದಾಟಿ ಹೊರ ಬಂದಾಗ ಜಗುಲಿಯ ಒಂದು ಪಕ್ಕದಲ್ಲಿ ಎಲೆ, ಅಡಿಕೆ ಜಗಿಯುತ್ತಾ ಕುಳಿತಿದ್ದ ತಂದೆಯನ್ನು ಒಮ್ಮೆ ದಿಟ್ಟಿಸಿದ ರವಿ, ಅಪ್ಪನಿಗೆ ವಿಷಯ ತಿಳಿಸುವುದು ಹೇಗೆ ಎಂದು ಯೋಚಿಸುತ್ತಾ, ಕೊನೆಗೆ ಧೈರ್ಯ ತಂದುಕೊಂಡು "ಅಪ್ಪಾ, ನಾನ್ ಹೋಗ್ಬಿಟ್ಟು ಬರ್ತೀನಪ್ಪಾ" ಎಂದು ಅಪರಾಧಿಯಂತೆ ತಲೆ ತಗ್ಗಿಸಿ ನಿಂತ. ಬಾಯಿಯ ತುಂಬಾ ತುಂಬಿದ್ದ ತಾಬೂಲದ ರಸವನ್ನು ಜಗುಲಿಯ ಒಂದು ಪಕ್ಕಕ್ಕೆ ಪಿಚಕ್ಕನೆ ಉಗಿದು, ಮುಖ ಗಂಟಿಕ್ಕಿಕೊಂಡು "ಏನ್ ಬರ್ತೀಯೋ ಏನೋ. ಬರೀ ಹೋಗೋದು ಬರೋದೇ ಆಯ್ತು. ಮೂರ್ಕಾಸಿನ ಪ್ರಯೋಜ್ನಾನೂ ಇಲ್ಲ. ಸುಮ್ನೆ ಖರ್ಚು, ಅಷ್ಟೆ." ಎಂದು ತಮ್ಮ ಮಾವಳಿ ಧಾಟಿಯಲ್ಲಿ ಉತ್ತರಿಸಿದರು. ರವಿಗೆ ಶಿವರಾಮಯ್ಯನವರ ಮಾತಿನಿಂದ ಬೇಸರ ಎನಿಸಲಿಲ್ಲ. ಕಾರಣ ಅವರ ಸ್ವಭಾವವೇ ಹಾಗೆ. ಇನ್ನು ಹೆಚ್ಚು ಹೊತ್ತು ಅಪ್ಪನ ಮುಂದೆ ನಿಂತರೆ ಸಹಸ್ರನಾಮಾರ್ಚನೆಯಾಗುವುದು ಖಂಡಿತ ಎಂದು ತಿಳಿದ ರವಿ ಮರು ಮಾತಾಡದೆ ಬಸ್ ನಿಲ್ದಾಣದ ಕಡೆಗೆ ಹೆಜ್ಜೆ ಹಾಕಿದ. ಮಗ ಸಂಪೂರ್ಣವಾಗಿ ಮರೆಯಾಗುವವರೆಗೂ ನಡುಮನೆಯ ಹೊಸ್ತಿಲಲ್ಲಿ ತದೇಕವಾಗಿ ನೋಡುತ್ತಿದ್ದ ಶಾರದಮ್ಮನವರ ಕಣ್ಣುಗಳಲ್ಲಿ ಹನಿಗೂಡಿದಾಗ, ಮಾಸಲು ಸೆರಗಿನ ತುದಿಯಿಂದ ಕಣ್ಣನ್ನು ಒತ್ತಿಕೊಂಡು ಅಡುಗೆ ಮನೆಕಡೆ ನಡೆದರು.

X X X

ವಿಶಾಲವಾದ ಡಾಂಬರು ರಸ್ತೆಯಲ್ಲಿ ಬಸ್ ವೇಗವಾಗಿ ಓಡುತ್ತಿತ್ತು. ರವಿಯ ಮನಸ್ಸೂ ಯೋಚನೆಯ ರಾಶಿ ಹೊತ್ತು ಹಾಗೇ ಓಡುತ್ತಿತ್ತು.

ಮೂರು ವರ್ಷಗಳ ಹಿಂದೆ ಪ. ವಿ ಪಡೆದರೂ ರವಿ ಇನ್ನೂ ನಿರುದ್ಯೋಗಿ. ಈ ವರ್ಷಗಳಲ್ಲಿ ಅವನು ಕೆಲಸಕ್ಕಾಗಿ ಅಲೆಯದ ಜಾಗವಿಲ್ಲ. ಆದರೆ ಈವರೆಗೂ ಒಂದು ಸಾಮಾನ್ಯ ಕೆಲಸವನ್ನೂ ಪಡೆಯಲು ಅವನಿಂದಾಗಿಲ್ಲ. ತನ್ನ ಓದಿಗಾಗಿ ತನ್ನ ತಂದೆ ತಾಯಿಗಳು ಕಷ್ಟಪಟ್ಟು ಹಣ ಕಳಿಸುತ್ತಿದ್ದರು. ತಾನೂ ಸಹ ಹಗಲು, ರಾತ್ರಿ ನಿಷ್ಠೆಯಿಂದಲೇ ವಿದ್ಯಾಭ್ಯಾಸ ಮಾಡಿದ್ದ. ಉತ್ತಮ ದರ್ಜೆಯಲ್ಲೂ ತೇರ್ಗಡೆಯಾಗಿದ್ದ. ಆದರೆ ಅವನ ಪ್ರತಿಭೆಗೆ, ಬುದ್ಧಿವಂತಿಕೆಗೆ ಈಗ ಯಾವ ಬೆಲೆ? ಬೆಟ್ಟದಷ್ಟು ಆಸೆ ಹೊತ್ತು ಪದವೀಧರನಾದ ರವಿ ಈಗ ಇಳಿವಯಸ್ಸಿನ ತಂದೆ ತಾಯಿಗಳಿಗೆ ಹೊರೆಯಾಗಿದ್ದಾನೆ. ತಾನು ದುಡಿದು ಸಾಕಬೇಕಾದ ಈ ವಯಸ್ಸಿನಲ್ಲಿ ವೃದ್ಧರಿಂದ ದುಡಿಸಿಕೊಳ್ಳುತ್ತಿದ್ದೇನೆ; ಸ್ವಂತ ವ್ಯಕ್ತಿತ್ವವಿಲ್ಲದೆ ಪರಾವಲಂಬಿಯಾಗಿದ್ದೇನೆ ಎನಿಸಿ ರವಿಗೆ ಬೇಸರ ಬಂದಿತ್ತು. ಕೇವಲ ಹಣ, ಪ್ರಭಾವ, ಅಧಿಕಾರದಿಂದ ಈಗ ಕೆಲಸ ದೊರಕಲಿಕ್ಕೆ ಸಾಧ್ಯ, ಪ್ರತಿಭೆಗೆ ಪುರಸ್ಕಾರ ಖಂಡಿತಾ ಇಲ್ಲ, ಎಂದು ರವಿಗೆ ಈಗಾಗಲೇ ತನ್ನ ಸ್ವಂತ ಅನುಭವದಿಂದ ತಿಳಿದಿತ್ತು. ಈ ಹಿಂದೆ ಎಷ್ಟೋ ಸಂದರ್ಶನಗಳಿಗೆ ಹೋಗಿ ಬಂದಿದ್ದ. ಎಲ್ಲಾ ಕಡೆ ಕೇವಲ ನಿರಾಶೆ ಎಂಬುದೊಂದನ್ನು ಬಿಟ್ಟರೆ ಬೇರೆ ಫಲಿತಾಂಶ ಸಿಕ್ಕಿರಲಿಲ್ಲ.

ಆದರೆ ಈ ಬಾರಿಯ ಸಂದರ್ಶನಕ್ಕೆ ಕರೆ ಬಂದಾಗಿನಿಂದ ರವಿಗೆ ಹೊಸ ಹುರುಪು ಬಂದಿದೆ. ಕಾರಣ, ಈವರೆಗೂ ತಾನು ಉಪಯೋಗಿಸದಿದ್ದ ಅಸ್ತ್ರ "ಪ್ರಭಾವ" ವನ್ನು ಈಗ ಉಪಯೋಗಿಸಿಕೊಳ್ಳುವ ಅವಕಾಶ ಸಿಕ್ಕಿದೆ. ಈಗ ಅವನು ಹೊರಟಿರುವುದು ಮೈಸೂರಿನ "ಆಜಾದ್ ಇಂಡಸ್ಟ್ರೀಸ್" ನ ಸಂದರ್ಶನಕ್ಕಾಗಿ. ಈ ಫ್ಯಾಕ್ಟರಿ, ಕಾಲೇಜಿನಲ್ಲಿ ತನ್ನ ಸಹಪಾಠಿಯಾಗಿದ್ದ ಪ್ರಸಾದ್ ಜೈನ್‌ನ ತಂದೆಯದು. ಸ್ನೇಹಿತ ಎಂಬ ಕಾರಣದಿಂದಾಗಿ ಪ್ರಸಾದ್ ತನ್ನ "ಪ್ರಭಾವ" ಬೀರಬಹುದು ಎಂಬ ಒಂದೇ ಒಂದು ಕಾರಣದಿಂದ, ಕೆಲಸ ದೊರಕುವುದರ ಬಗ್ಗೆ ತನ್ನಲ್ಲೇ ಭರವಸೆ ಹುಟ್ಟಿತ್ತು.

X X X

ಬಸ್ಸು ನಿಲ್ದಾಣವನ್ನು ತಲುಪುತ್ತಿದ್ದಂತೆ ರವಿ ಭಾವನಾ ಲೋಕದಿಂದ ಎಚ್ಚೆತ್ತ. ತಾನೆಷ್ಟು ಬೇಗ ಮೈಸೂರು ತಲುಪಿದೆ ಎನಿಸಿತು. ಬಸ್ ಇಳಿದವನು ಸಾಕಷ್ಟು ಸಮಯವಾಗಿದ್ದರಿಂದ ನೇರವಾಗಿ 'ಆಜಾದ್ ಇಂಡಸ್ಟ್ರೀಸ್' ಕಡೆಗೆ ದಾಪುಗಾಲು ಹಾಕಿದ.

ಆಜಾದ್ ಇಂಡಸ್ಟ್ರೀಸ್ ಆವರಣ ತಲುಪುತ್ತಿದ್ದಂತೆ ರವಿಗೆ ಒಂದು ಕ್ಷಣ ಭಯವಾಯ್ತು. ಸಂದರ್ಶನಕ್ಕಾಗಿ ಬಂದು ಸೇರಿದ್ದವರ ಭಾರಿ ಸಮೂಹವೇ ಅಲ್ಲಿತ್ತು. ಇಷ್ಟೊಂದು ಜನಕ್ಕೂ ಕೆಲಸ ಬೇಕು. ಎಲ್ಲರೂ ನಿರುದ್ಯೋಗಿಗಳು. ಅವರಿಗೂ ತನ್ನಂತೆಯೇ ಕೆಲಸದ ಅವಶ್ಯಕತೆ ಇದೆಯೇ? ಎಂದು ಒಮ್ಮೆ ಯೋಚಿಸಿದ. ಅಥವಾ ತನಗಿಂತಲೂ ಹೆಚ್ಚು ಕಷ್ಟ ಪಡುತ್ತಿದ್ದವರೂ ಇರಬಹುದು ಎನಿಸಿತು. ಇಲ್ಲಿರುವ ಕೆಲಸ ಯಾರಿಗೆ ದೊರಕೀತು? ಅಂದರೆ ಒಂದು ರೀತಿಯ "ಅದೃಷ್ಟದ ಆಟ" ಎನ್ನಬಹುದು. ಅಥವಾ "ಜೂಜಾಟ" ಎನ್ನಲೂಬಹುದು ಎನಿಸಿತು. ಭಾರಿ ನಿರುದ್ಯೋಗಿ ಸಂದಣಿಯಲ್ಲಿ ತನ್ನ ಸರದಿಗಾಗಿ ಕಾಯುತ್ತ ನಿಂತ.

ಕಾಲ ಸರಿಯಿತು. ಸಂದರ್ಶಕರ ಕೊಠಡಿಯಿಂದ ಸಮವಸ್ತ್ರಧಾರಿ ಜವಾನನೊಬ್ಬ ಹೊರ ಬಂದು, "ಮಿಸ್ಟರ್ ರವಿಕುಮಾರ್" ಎಂದು ಜೋರಾಗಿ ಕೂಗಿದ. ರವಿಗೆ ತಕ್ಷಣ ಮೈ ರೋಮಾಂಚನವಾಗಿ, ಎದ್ದು ತನ್ನ ಶರ್ಟು ಸರಿಪಡಿಸಿಕೊಂಡು, ಫೈಲ್ ಹಿಡಿದು ಒಳಗೆ ನಡೆದ.

ವಿಶಾಲವಾದ ಸಂದರ್ಶಕರ ಕೋಣೆ ವೃತ್ತಾಕಾರದ ಭಾರಿ ಟೇಬಲ್ ಸುತ್ತ ಸುಮಾರು 5–6 ಜನ ಸೂಟುಧಾರಿ ವ್ಯಕ್ತಿಗಳು ಕುಳಿತಿದ್ದರು.

"ಪ್ಲೀಸ್ ಕಮ್ ಇನ್. ಟೇಕ್ ಯುವರ್ ಸೀಟ್" ಎಂದು ಮಧ್ಯದಲ್ಲಿದ್ದ ವ್ಯಕ್ತಿಯೊಬ್ಬರು ರವಿಯನ್ನು ಸ್ವಾಗತಿಸಿದರು.

"ಥ್ಯಾಂಕ್ಸ್ ಸರ್" ಎಂದು ರವಿ ಕುರ್ಚಿಯಲ್ಲಿ ಕುಳಿತ.

"ನಿಂ ಹೆಸ್ರು ರವಿ ಕುಮಾರ್ ತಾನೆ?" ಬಲ ತುದಿಯಲ್ಲಿದ್ದ ವ್ಯಕ್ತಿಯೊಬ್ಬರ ಪ್ರಶ್ನೆ.

"ಎಸ್ ಸರ್" ರವಿ ಚುಟುಕಾಗಿ ಉತ್ತರಿಸಿದ.

"ನಿಂ ಊರು ಯಾವ್ದು ?" ಕನ್ನಡಕಧಾರಿಯೊಬ್ಬರು ಪ್ರಶ್ನಿಸಿದರು.

"ಶಾಂತಿಪುರ" ಎಂದ ರವಿ.

"ಬಿ. ಎ. ನಲ್ಲಿ ಏನೇನು ವಿಷಯಗಳನ್ನು ತೆಗೆದುಕೊಂಡಿದ್ರಿ?" ಎಂದರು ಮತ್ತೊಬ್ಬರು. ರವಿ ವಿವರಿಸಿದ. "ಸರಿ, ಯು ಕೆನ್ ಗೋ ನೌ" ಎಂದು ಸೂಟುಧಾರಿ ವ್ಯಕ್ತಿಯೊಬ್ಬರು ಆದೇಶವಿತ್ತರು.

ರವಿಗೆ ಬಹಳ ಬೇಸರವಾಯ್ತು. ಇಷ್ಟು ಪ್ರಶ್ನೆ ಕೇಳಲಿಕ್ಕೆ ತಾನು ಅಲ್ಲಿಂದ ಇಲ್ಲೀವರೆಗೆ ಬರಬೇಕಾಗಿತ್ತೆ ಎಂದುಕೊಂಡರೂ, ಮತ್ತೊಮ್ಮೆ "ಸರ್ ......" ಎಂದು ಹೇಳುವಷ್ಟರಲ್ಲೆ ಅಧಿಕಾರಿಗಳು ಬೆಲ್ ಒತ್ತಿದರು.

"ರವಿಗೆ ಕೋಪ ಉಕ್ಕಿತು. ಹೃದಯ ಆವೇಶದಿಂದ ಸಿಡಿಯಿತು: "ಈ ಪ್ರಶ್ನೆ ಕೇಳೋಕೆ ಇಲ್ಲಿಗೆ ಕರೆಸಿದ್ರಾ? ಇದಕ್ಕಿಂತ ಹೆಚ್ಚಿಗೆ ವಿಷಯಾನ ಅಪ್ಲಿಕೇಶನ್ನಲ್ಲೇ ಬರ್ದಿದೀನಿ. ಇಂಥ ಸಂಪತ್ತಿಗೆ ಈ ಸಂದರ್ಶನ ಯಾಕ್ ಮಾಡ್ಬೇಕು? 'ಸಂದರ್ಶನ' ಅಂತ ಹೇಳ್ಕೊಂಡು ಬಡ ನಿರುದ್ಯೋಗಿಗಳಿಂದ ಹಣ ಸುಲಿಗೆ ಮಾಡ್ತೀರ; ನೀವು ಸೂಟು

(ಮೂರನೇ ಪುಟಕ್ಕೆ)

## ಸೂರ್ಯಾಸ್ತ

ಬಹುದೂರ, ದೂರ ಸಾಗಿ
ಬಳಲಿ ಬೆಂಡಾದಾಗ,
'ಇರುವುದಿಲ್ಲವೆ ನಿತ್ಯ ಬವಣೆ?' ಎಂದು
ಮನೆ ಸೇರುತ್ತಾರೆ.
ಜಂಜಾಟದ ನಾಳೆ–ಬದುಕಿಗಾಗಿ
ತಲೆಗೆ ಕೈ ಹೊತ್ತು ಕೂರುತ್ತಾರೆ.
ನೀಳ ನಿಟ್ಟುಸಿರಂಚಿನಲ್ಲಿ
ಸೂರ್ಯಾಸ್ತವಾಗುತ್ತದೆ.

ಡಿಗ್ರಿ ಪಡೆದಾಗ–
ಮನದಲ್ಲಿ ಮೂಡಿದ ಉದ್ಯೋಗದ ಬೆಳಕು–
ಮರೀಚಿಕೆಯ ಅರಸಿ ಅಲ್ಲಲ್ಲಿ ತಿರುಗಿ
ಎಲ್ಲೂ ಏನೂ ಬೆಳಕು ಕಾಣದೆ
ನಿರಾಸೆಯ ಕತ್ತಲಂಚಿನಲ್ಲಿ
ಸೂರ್ಯಾಸ್ತವಾಗುತ್ತದೆ.

ಹರಿದು ಹರಿದು ಬೇಜಾರು ಬಂದ ನದಿ
ಹುಚ್ಚೆದ್ದು ಪ್ರವಾಹದಿ ನುಗ್ಗಿ
ಕೊಚ್ಚುತ್ತಾ ಕೊಚ್ಚುತ್ತಾ ಕ್ರೌರ್ಯವಾಗಿ
ಜನರ ಬದುಕ ಬೆಳಕನ್ನು ಅಸ್ತವಾಗಿಸುತ್ತದೆ,
ಸೂರ್ಯಾಸ್ತವಾಗಿಸುತ್ತದೆ.

ದಿನ ದಿನವೂ ಪುಟಿಯುವ ಆಸೆಗಳಲ್ಲಿ
ಸೂರ್ಯೋದಯವಾಗುತ್ತದೆ.
ಆಶೆ–ನಿರಾಶೆಗಳ ನಡುವೆ ಗುದ್ದಾಟದಲ್ಲಿ
ಹೇಳಿಕೊಳ್ಳಲಾಗದ ದಳ್ಳುರಿ ಉರಿದು ಉರಿದು
ಬತ್ತಿದ ಆಸೆ ಬಯಲಿನಲ್ಲಿ
ದಿನವೂ ನೂರಾರು ಸೂರ್ಯರು
ಅಸ್ತಂಗತರಾಗುತ್ತಾರೆ.

ಕಂ. ಕ. ಕೃಷ್ಣಮೂರ್ತಿ

# ಸುದ್ದಿ ಸಂಗ್ರಹ

### ಮಹಿಳೆಯರ ರ್‍ಯಾಲಿ

ಮಹಿಳೆಯರನ್ನು ಗುಲಾಮರಂತೆ ನಡೆಸಿಕೊಳ್ಳುವುದು, ಅವರನ್ನು ಅಶ್ಲೀಲವಾಗಿ ಚಿತ್ರಿಸುವುದು ಇವುಗಳನ್ನು ನಿಲ್ಲಿಸುವಂತೆ ಹಾಗೂ ಅಗತ್ಯ ವಸ್ತುಗಳ ಬೆಲೆ ಇಳಿಸುವಂತೆ ಘೋಷಣೆ ಕೂಗುತ್ತಾ ೫೦೦೦ಕ್ಕೂ ಹೆಚ್ಚು ಜನ ಮಹಿಳೆಯರು ಫೆ.೬ರಂದು ಮದ್ರಾಸಿನಲ್ಲಿ ಪ್ರದರ್ಶನ ನಡೆಸಿದರೆಂದು ವರದಿ. ಮೆರವಣಿಗೆಗೆ ಮೊದಲು, ಹಲವಾರು ಜನಪ್ರಿಯ ತಮಿಳು ಪತ್ರಿಕೆಗಳನ್ನು ಸುಡಲಾಯಿತು.

ಕೊಳೆಗೇರಿ ನಿವಾಸಿಗಳು, ಗೃಹಿಣಿಯರು, ಉದ್ಯೋಗಸ್ಥ ಮಹಿಳೆಯರು, ಅಧ್ಯಾಪಕಿಯರು, ವಿದ್ಯಾರ್ಥಿನಿಯರು–ಹೀಗೆ ಸಮಾಜದ ವಿವಿಧ ರಂಗಗಳ ಮಹಿಳೆಯರು ಪ್ರತಿಭಟನಾ ಪ್ರದರ್ಶನದಲ್ಲಿ ಪಾಲ್ಗೊಂಡಿದ್ದರು.

೫ ಕಿ.ಮೀ. ದೂರ ಮೆರವಣಿಗೆ ಸಾಗಿದಂತೆ, ಮೆರವಣಿಗೆಕಾರರು ಅಶ್ಲೀಲ ಬೋರ್ಡ್‌ಗಳು, ಪೋಸ್ಟರುಗಳ ಮೇಲೆ ಸಗಣಿ, ಕೊಳೆತಮೊಟ್ಟೆ, ಟಾರು, ನೀರು ಎರಚಿ ತಮ್ಮ ಕೋಪ ಹೊರಗೆಡಹಿದರು.

ಕೊಳಗೇರಿಗಳಲ್ಲಿ ಮೂಲಭೂತಸೌಲಭ್ಯಗಳನ್ನೂ ಹೆರಿಗೆ ಆಸ್ಪತ್ರೆಗಳಲ್ಲಿ ಅಗತ್ಯ ಸೌಲಭ್ಯಗಳನ್ನೂ ಒದಗಿಸಬೇಕು. ತನಿಖೆಗಾಗಿ ಹೆಂಗಸರನ್ನು ಪೋಲಿಸ್ ಸ್ಟೇಷನ್ನಿಗೆ ಒಯ್ಯಬಾರದು ಮುಂತಾದ ಬೇಡಿಕೆಗಳಿದ್ದ ಮನವಿಪತ್ರವನ್ನು ಅವರು ಸಚಿವಾಲಯದ ಅಧಿಕಾರಿಯೊಬ್ಬರಿಗೆ ಸಲ್ಲಿಸಿದರು.

### ಅಗತ್ಯ ಸೇವೆಗಳ ಪಟ್ಟಿ ಪ್ರಕಟಣೆ

"೧೯೮೦ರ ರಾಷ್ಟ್ರೀಯ ಭದ್ರತಾ ಕಾಯಿದೆ"ಯಲ್ಲಿ ಹೇಳಿರುವಂತೆ ಸರ್ಕಾರ 'ಅಗತ್ಯ ಸೇವೆ' ಗಳೆಂದು ಘೋಷಿಸುವ ಯಾವುದೇ ಉದ್ಯಮದಲ್ಲಿ ಸೇವೆಗಳಿಗೆ ಅಡಚಣೆ ಉಂಟು ಮಾಡುವವರನ್ನು (ಮುಷ್ಕರ ಹೂಡುವವರನ್ನು) ಬಂಧಿಸಲು ಅವಕಾಶವಿದೆ. ಆದರೆ ಇತ್ತೀಚಿಗೆ ಸುಪ್ರೀಂಕೋರ್ಟ್ ನೀಡಿದ ಒಂದು ತೀರ್ಪಿನಲ್ಲಿ, ಇಂಥಿಂಥವು ಸಮಾಜಕ್ಕೆ ಅತ್ಯವಶ್ಯ ಸರಬರಾಜು ಹಾಗೂ ಸೇವೆಗಳೆಂದು ಶಾಸನ ಅಥವಾ ಪ್ರಕಟಣೆ ಹೊರಡಿಸಬೇಕು ಅಥವಾ ಸಾಕಷ್ಟು ಮುಂದಾಗಿ ಪ್ರಕಟಿಸಬೇಕು; ಹೀಗೆ ಮಾಡದೆ ಯಾರನ್ನೂ ಶಿಕ್ಷಾನುಬದ್ಧತೆಗೆ ಗುರಿಪಡಿಸಬಾರದು ಎಂದು ಸ್ಪಷ್ಟಪಡಿಸಿತ್ತು.

ಅದರಂತೆ ಈಗ ಸರ್ಕಾರ ೧೭ ಅಗತ್ಯಸೇವೆಗಳ ಪಟ್ಟಿ ಪ್ರಕಟಿಸಿದೆ. ಅಂಚೆ–ತಂತಿ, ರೈಲ್ವೆ, ಬ್ಯಾಂಕಿಂಗ್ ಕ್ಷೇತ್ರಗಳು, ಕೈಗಾರಿಕೆಗಳು, ಸರಕಾರಿ ಕಛೇರಿಗಳು, ಗಣಿಗಳು, ನೌಕಾ ಮತ್ತು ವಿಮಾನಸಾರಿಗೆ–ಇತ್ಯಾದಿ ೧೬ ಸೇವೆಗಳಲ್ಲದೆ, ೧೭ನೆಯದು: "ಈ ಮೇಲಿನ ವರ್ಗಗಳಲ್ಲಿ ಸೇರಿಲ್ಲದ, ಕೇಂದ್ರ ಅಥವಾ ರಾಜ್ಯ ಸರ್ಕಾರಕ್ಕೆ ಸಂಬಂಧಿಸಿದ ಯಾವುದೇ ಸೇವೆಗಳು."

## ಕೊಲೆ, ಅಸ್ತ್ರ, ಕೊಲೆಗಾರ, ಇತ್ಯಾದಿ.

ಒಬ್ಬನ ಸಾವು ಅನ್ಯರಿಂದ ಆದರೆ ಅದನ್ನು ಕೊಲೆ ಎನ್ನುವುದು ರೂಢಿ. ಹಾಗೆಯೇ ಈ ಸಾವಿಗೆ ಬಳಸಲಾದ ಅಸ್ತ್ರವನ್ನು ಕೊಲೆಯ ಸಾಧನವೆಂದು ಕರೆಯುವುದು, ಆ ಸಾಧನ ಬಳಸಿ ಸಾವಿಗೆ ಕಾರಣನಾದವನನ್ನು ಕೊಲೆಗಾರ ಎನ್ನುವುದು ಪ್ರಚಲಿತ.

ಕೊಲೆಯ ಸಾಧನವಾದ ಅಸ್ತ್ರ ಬಳಸಿದಾಗ ಯಾರ ಮೇಲೆ ಅದನ್ನು ಬಳಸಿತೋ ಆ ವ್ಯಕ್ತಿ ಸಾಯದಿದ್ದಲ್ಲಿ ಹಾಗೆ ಯತ್ನಿಸಿದ ವ್ಯಕ್ತಿ ಪೋಲೀಸ್ ಭಾಷೆಯಲ್ಲಿ 'ಕೊಲೆಯತ್ನ'ದ ಆರೋಪಕ್ಕೆ ಒಳಗಾಗುತ್ತಾನೆ.

ಒಬ್ಬನ ವರ್ತನೆಯ ಕಾರಣದಿಂದ ಇನ್ನೊಬ್ಬ ಮಾನಸಿಕವಾಗಿ ಘಾಸಿಗೊಂಡು ಏನನ್ನೋ ಮಾಡಿಕೊಂಡು ಪ್ರಾಣತ್ಯಾಗ ಮಾಡಿದಾಗ?

ಇಲ್ಲಿ 'ಒಬ್ಬನ ವರ್ತನೆ'ಯೇ ಇನ್ನೊಬ್ಬನ ಸಾವಿಗೆ ಪ್ರೇರಕವಾದರೂ 'ಅದು' ಸಾವಿಗೆ ನೇರ ಕಾರಣವಲ್ಲದ್ದರಿಂದ ಸಾವಿಗೆ ಕಾರಣವಾದ ವರ್ತನೆ ಇಲ್ಲಿ ಕೊಲೆಯ ಸಾಧನವೆಂದಾಗಲಿ, ಆ ರೀತಿ ವರ್ತಿಸಿದವನನ್ನು ಕೊಲೆಗಾರನೆಂದಾಗಲಿ ನೇರವಾಗಿ ಹೇಳಲು ಅಥವಾ ಹಾಗೆ ನ್ಯಾಯಾಲಯದಲ್ಲಿ ಸ್ಥಾಪಿಸಲು ಕಾನೂನಿನ ತೊಡಕು ಬರಬಹುದೇನೊ?

ಆದರೆ.......

ಸಾಮಾಜಿಕ, ರಾಜಕೀಯ, ಆರ್ಥಿಕ ಕ್ಷೇತ್ರಗಳಲ್ಲಿ 'ಪ್ರಭಾವ' ಪಡೆದ ವ್ಯಕ್ತಿಯ ಸಾವಿಗೆ ಆ ಪ್ರಭಾವಗಳಿಲ್ಲದವನು ಮೇಲ್ಕಂಡಂತೆ ಪರೋಕ್ಷ ಪ್ರೇರಕನಾದರೆ ಅವನ ವಿರುದ್ಧ ಇರುವ ಕ್ರಮಗಳು ಪ್ರಭಾವ ಇಲ್ಲದವನ ಸಾವಿಗೆ ಪರೋಕ್ಷ ಕಾರಣನಾದವನ ಬಗ್ಗೆ ಇಲ್ಲದಿರುವ ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಸಾವಿಗೆ ಒಳಗಾದವನು ಪ್ರಭಾವಶೂನ್ಯನಾಗಿ ಸಾವಿಗೆ ಪರೋಕ್ಷ ಕಾರಣನಾದವನು ಪ್ರಭಾವಿಯಾಗಿದ್ದರಂತೂ ಹರೋಹರ.

–ಕೈ. ಮಹಾಬಲರಾವ್.

'ಜನಮಿತ್ರ'ದಲ್ಲಿ ಪತ್ರ

### ಹತಾಶ .....

[ಹಿಂದಿನ ಪುಟದಿಂದ]

ಬೂಟು ಹಾಕ್ಕೊಂಡು ಮಜಾ ಮಾಡ್ತೀರ. ಬರೀ ದುಡ್ಡು ಸುರಿಯೋಕ್ಕೆ, ಪ್ರಭಾವ ಬೀರೋಕ್ಕೇ ನೀವು ಕೆಲ್ಸ ಕೊಡೋದು. ನಿಮ್ಮಂಥೋರು ಇರೋದ್ರಿಂದ್ಲೇ ನಮ್ಮಂಥ ಸಾವಿರಾರು ಯುವಕರು ಇನ್ನೂ ನಿರುದ್ಯೋಗಿಗಳಾಗಿ ಸಾಯ್ತಾ ಇರೋದು...."

ರವಿ ಇನ್ನೂ ಏನೋ ಹೇಳುತ್ತಿದ್ದ. ಅಷ್ಟರಲ್ಲಿ ಅವನ ಬಾಯನ್ನು ಯಾರೋ ಮುಚ್ಚಿದರು. ಐದಾರು ಜನ ಅವನ ಕೈ–ಕಾಲುಗಳನ್ನು ಹಿಡಿದು ಹೊರತಂದು ಬೀದಿಯಲ್ಲಿ ಎಸೆದರು. ಆ ರಭಸಕ್ಕೆ ರವಿಯ ಕೈ ಕಾಲುಗಳಲ್ಲಿ ಏಟುಬಿದ್ದು, ರಕ್ತ ಚಿಮ್ಮಿತು. ಬಟ್ಟೆ ಎಲ್ಲಾ ಹರಿಯಿತು. ಒಮ್ಮೆ ರವಿ ಸುತ್ತಲೂ ನೋಡಿದ. ಕೆಲವರು ಅವನತ್ತ ಆಶ್ಚರ್ಯ, ಕುತೂಹಲದಿಂದ ನೋಡುತ್ತಿದ್ದಾರೆ. ಬಳಲಿಕೆ, ರೋಷ, ಕೋಪ, ಅವಮಾನದಿಂದ ಅವನ ಹೃದಯ ಕುದಿಯತೊಡಗಿತು. ಒಮ್ಮೆಲೇ ಎದ್ದು ಏನನ್ನೋ ಹೇಳಲು ಬಾಯಿತೆರೆದ. ಇದ್ದಕ್ಕಿದ್ದಂತೆ ಅವನ ದೇಹದ ನರಗಳಲ್ಲೆಲ್ಲಾ ಶಕ್ತಿ ಇಂಗಿದಂತಾಗಿ ನಿಷ್ಕ್ರಿಯ ವಾದಂತಾಯ್ತು. ನಿಧಾನವಾಗಿ ನೆಲಕ್ಕೆ ಕುಸಿದ.

# ಖನಿಜಗಳ ಮಡಿಲಲ್ಲಿ ಕೊಪ್ಪದ ಪರಿಸರ...

### ಭೂಕಂಪವೇ? ಭಯಬೇಡ!

ಪ್ರಪಂಚದಲ್ಲೇ ಅತ್ಯಂತ ಗಟ್ಟಿಮುಟ್ಟಾದ ಜಾತಿಗೆ ಸೇರಿದ ಭೂ ರಚನೆಯುಳ್ಳ ಈ ಪ್ರದೇಶದಲ್ಲಿ ಭೂಕಂಪಗಳಾಗುವ ಸಾಧ್ಯತೆ ಅತೀ ಕಡಿಮೆ. ಅಗ್ನಿಪರ್ವತಗಳಂತೂ ಇಲ್ಲವೇ ಇಲ್ಲ. ಅಂದಮೇಲೆ, ಹೇಗೂ ಚಟುವಟಿಕೆಯೇ ಬೇಡವಾದ, ನಿದ್ರಾಪ್ರಿಯರಾದ ನಮಗೆ ನಿದ್ರಾಭಂಗದ ಭಯವಿಲ್ಲ!

0 0 0

### ಸಮುದ್ರದ ಅಡಿಯಲ್ಲಿ ಹುಟ್ಟು!

೨೫೦ ರಿಂದ ೩೫೦ ಕೋಟಿ ವರ್ಷಗಳಷ್ಟು ಹಿಂದೆ ಈ ಇಡೀ ಪ್ರದೇಶ ಸಮುದ್ರದ ಅಡಿಯಲ್ಲಿತ್ತು. ಇಲ್ಲಿ ಈಗ ದೊರೆಯಬಹುದಾದ ಎಲ್ಲಾ ವಸ್ತುಗಳೂ (ಬಂಡೆಗಳೂ ಸಹ) ಆಗ ಸಮುದ್ರದ ಅಡಿಯಲ್ಲಿ ಕೆಸರಿನ ರೂಪದಲ್ಲಿ ಶೇಖರವಾದವು. ನಂತರ ಸಮುದ್ರದ ಒತ್ತಡಕ್ಕೆ ಅನುಗುಣವಾಗಿ ಉಬ್ಬು–ತಗ್ಗುಗಳುಂಟಾದವು. ಕ್ರಮೇಣ ಸಮುದ್ರ ಹಿಂದೆ ಹಿಂದೆ ಸರಿಯುತ್ತಾ ಈ ದಿಬ್ಬಗಳು ದೀರ್ಘಕಾಲ ಸರ್ವತೋಮುಖ ಒತ್ತಡಕ್ಕೆ ಸಿಕ್ಕಿ ನಮಗೆ ಈಗ ಕಾಣುವಂತೆ ಗುಡ್ಡ, ಬೆಟ್ಟ, ಕಣಿವೆ, ಬಯಲು ಎಲ್ಲಾ ಉಂಟಾದವು. ಆದರೆ ಈಗೀಗ ಇಲ್ಲಿನ ಗುಡ್ಡಗಳು ಬೆಳೆಯುತ್ತಿಲ್ಲ; ಬೆಳೆಯುವಷ್ಟು ಬೆಳೆದು ಮುಗಿಸಿವೆ.

ನಂಬಿಕೆ ಬರಾಗುವುದಿಲ್ಲವೇ?

ಹಾಗಾದರೆ ಇದನ್ನು ಕೇಳಿ:

### ಹಿಮಾಲಯ ಬೆಳೆಯುತ್ತಿದೆ!

ಹಿಮಾಲಯ ಪರ್ವತವೂ ಸಹ ಹೀಗೇ ಒಂದಾನೊಂದು ಕಾಲದಲ್ಲಿ (ಕೋಟ್ಯಂತರ ವರ್ಷಗಳ ಹಿಂದೆ) ಸಮುದ್ರದ ಅಡಿಯಲ್ಲೇ ರೂಪುಗೊಂಡಿತೆಂದು ವಿಜ್ಞಾನಿಗಳ ಶೋಧನೆ. ಇನ್ನೂ ಆಶ್ಚರ್ಯದ್ದೆಂದರೆ ಹಿಮಾಲಯ ಈಗಲೂ ವರ್ಷಕ್ಕೆ ೩ ಸೆ.ಮೀ. ನಷ್ಟು ಎತ್ತರ ಬೆಳೆಯುತ್ತಿದೆ!

0 0 0

### ಮುಟ್ಟಿದ್ದೆಲ್ಲಾ ಲೋಹ

ಇಲ್ಲಿ ಮುಟ್ಟಿದ್ದೆಲ್ಲಾ ಲೋಹವೇ–ಮೈದಾಸನ ಕಥೆಯ ಹಾಗೆ. ಬೆಟ್ಟಗಳಲ್ಲಿರುವ ಬಂಡೆಗಳಲ್ಲಿ ಸಾಕಷ್ಟು ಪ್ರಮಾಣದಲ್ಲಿ ಕಬ್ಬಿಣ ಇದೆ. (ಬಿ. ಹೆಚ್. ಕ್ಯು. ರೂಪದ್ದು.) ತಗ್ಗು ಪ್ರದೇಶದ ಕಲ್ಲುಗಳೆಲ್ಲ ಗ್ರಾನೈಟ್‌ನವು.

0 0 0

# ವಿಜ್ಞಾನಿಗಳ ಕಿರು ಪರಿಚಯ

### ದೇಬಶೀಶ್ ರಾಯ್

ಕಲ್ಕತ್ತದ ಜಾಧವ್‌ಪುರ್ ವಿಶ್ವವಿದ್ಯಾನಿಲಯದಿಂದ ೧೯೭೦ರಲ್ಲಿ ಭೂವಿಜ್ಞಾನದಲ್ಲಿ ಎಂ.ಎಸ್ಸಿ. ನಂತರ ಡಾಕ್ಟರೇಟ್‌ಗಾಗಿ ವಿ.ವಿ ಧನಸಹಾಯ ಆಯೋಗದ ನಿಧಿಯ ಆಶ್ರಯದಲ್ಲಿ ಉ. ಪ್ರದೇಶದ ಡಾರ್ಜಿಲಿಂಗ್‌ನ ಬೆಟ್ಟಗಳಲ್ಲಿ ಟಂಗ್‌ಸ್ಟನ್ ಲೋಹದ ಬಗ್ಗೆ ಒಂಬತ್ತು ವರ್ಷ ವ್ಯಾಪಕ ಸಂಶೋಧನೆ. ಅದನ್ನು ಕೈಬಿಟ್ಟು (ಹಣ ಸಹಾಯದ ಕೊರತೆ?) ಭಾರತ ಭೂ ವಿಜ್ಞಾನ ಸರ್ವೆಯಲ್ಲಿ ಕ್ಲಾಸ್ I ಸೈಂಟಿಫಿಕ್ ಆಫೀಸರ್ ಆಗಿ ಸೇರ್ಪಡೆ.

ಇನ್ನೂ ೩೦ರ ಪ್ರಾಯ, ಆದರೆ ಸಾಧನೆ ಹಲವು. ೧೯೭೬ರಲ್ಲಿ ವಿದ್ಯಾರ್ಥಿಯಾಗಿದ್ದಾಗಲೇ ದೆಹಲಿಯಲ್ಲಿ ನಡೆದ "ಹಿಮಾಲಯದ ಭೂ ವಿಜ್ಞಾನ" ಕುರಿತ ಅಂತರರಾಷ್ಟ್ರೀಯ ಸಮ್ಮೇಳನದಲ್ಲಿ ಭಾಗವಹಿಸಿದ್ದ ಭಾರತದ ಪ್ರತಿನಿಧಿಗಳಲ್ಲೊಬ್ಬನು. ಸಮ್ಮೇಳನದಲ್ಲಿ ಭಾಗವಹಿಸಿದ್ದ ಏಕೈಕ ವಿದ್ಯಾರ್ಥಿ ವಿಜ್ಞಾನಿ ಈತ.

೧೯೭೦–೮೧ರಲ್ಲಿ ದಕ್ಷಿಣ ಕೋಲಾರದಲ್ಲಿ ಹೊಸದಾಗಿ ಚಿನ್ನದ ನಿಕ್ಷೇಪದ ಶೋಧದಲ್ಲಿ ಭಾಗಿ (ಈಗ ಅಲ್ಲಿ ಗಣಿ ಕೆಲಸ ಪ್ರಾರಂಭವಾಗಿದೆ.)

ಟಂಗ್‌ಸ್ಟನ್ ಲೋಹದ ಬಗ್ಗೆ ಹಲವಾರು ಲೇಖನಗಳ ಪ್ರಕಟಣೆ.

### ಶಫೀಖ್ ಅಹಮದ್

೩೦ರ ಅಂಚಿನ, ತಂಡದ ಇನ್ನೊಬ್ಬ ವಿಜ್ಞಾನಿ. ಕನ್ನಡಿಗ. ಮೈಸೂರು ವಿ. ವಿ. ಇಂದ ಎಂ. ಎಸ್ಸಿ. ಭೂವಿಜ್ಞಾನ ಸರ್ವೆಯ ವೈಮಾನಿಕ ತಂಡದಲ್ಲಿ (ಖನಿಜ ಶೋಧಕ್ಕಾಗಿ ವೈಮಾನಿಕ ಸರ್ವೆ) ೩ ವರ್ಷ ಸೀನಿಯರ್ ಟೆಕ್ನಿಕಲ್ ಅಸಿಸ್ಟೆಂಟ್. ಈಗ ಕ್ಲಾಸ್ I ಸೈಂಟಿಫಿಕ್ ಆಫೀಸರ್.

---

### ರೇಷ್ಮೆ ಬೆಳೆಗೆ ಸಕಾಲ

ಕೊಪ್ಪ: ರೇಷ್ಮೆ ಬೆಳೆಗೆ ಪಶ್ಚಿಮ ಘಟ್ಟಗಳ ಈ ಭಾಗ ಬಹಳ ಅನುಕೂಲಕರವಾಗಿದೆಯೆಂದು ಕಂಡುಬಂದಿದ್ದು, ಅದರ ಅಭಿವೃದ್ಧಿಗಾಗಿ ಸರ್ಕಾರ ಪಶ್ಚಿಮ ಘಟ್ಟ ಅಭಿವೃದ್ಧಿ ಯೋಜನೆಯಡಿ ಕಾರ್ಯಕ್ರಮ ಹಾಕಿಕೊಂಡಿದೆ.

ಈಗ ಹಿಪ್ಪುನೇರಳೆ ಕಡ್ಡಿ ನೆಡಲು ಸೂಕ್ತ ಕಾಲವಾಗಿದ್ದು, ಸೂಕ್ತ ರೀತಿಯಲ್ಲಿ ಬೇಸಾಯ ಮಾಡಿದರೆ ಮಳೆಗಾಲ ಪ್ರಾರಂಭವಾಗುವುದರೊಳಗೇ ಒಂದು ಬೆಳೆ ತೆಗೆಯಲೂಬಹುದಾಗಿದೆ. ಒಂದು ಎಕರೆಗೆ ಸುಮಾರು ೧ ಟನ್ ಕಡ್ಡಿ ಬೇಕಾಗುವುದು. ಅದರ ಬೆಲೆ ನೂರು ರೂ. ಸಾಗಣೆ ವೆಚ್ಚವನ್ನು ಸರ್ಕಾರ ಭರಿಸುತ್ತದೆ.

ರೇಷ್ಮೆ ಕೃಷಿ ಕೈಗೊಳ್ಳುವ ರೈತರಿಗೆ ಕೊಪ್ಪ, ಶೃಂಗೇರಿ, ನ. ರಾ. ಪುರಗಳಲ್ಲಿರುವ ಇಲಾಖೆ ಸಿಬ್ಬಂದಿ ಸೂಕ್ತ ಮಾರ್ಗದರ್ಶನ ನೀಡುವರಲ್ಲದೆ, ಪ್ರಾರಂಭದಲ್ಲಿ ತಿಂಗಳಿಗೆ ೧೦೦ ರೂ. ಶಿಷ್ಯವೇತನದೊಂದಿಗೆ ೩ ತಿಂಗಳ ತರಬೇತಿ ಕೊಡಲಾಗುವುದು. ಹುಳುಸಾಕಣೆಗಾಗಿ ಕಟ್ಟಡ, ಸಾಕಣೆ ಉಪಕರಣಗಳು ಮುಂತಾದವನ್ನು ಉಚಿತವಾಗಿ ಒದಗಿಸಲಾಗುತ್ತದೆ.

ಈ ಭಾಗದ ರೈತರು ಯೋಜನೆಯ ಪೂರ್ಣ ಉಪಯೋಗಪಡೆಯಬೇಕಾಗಿ ವಿನಂತಿಸಿ, ಕೃಷಿ ನಿರೀಕ್ಷಕ ಪಾಟೀಲ್ ಕೊ.ಎಪ್ಪಾ...

# ಕೊಪ್ಪ ತಾ॥ ಯುವಜನ ಮೇಳ

ಹಿರೇಕೊಡಿಗೆ: ಕೊಪ್ಪ ತಾಲೂಕು ಮಟ್ಟದ ಯುವಜನ ಮೇಳ ಹಿರೇಕೊಡಿಗೆಯಲ್ಲಿ ಫೆ. ೬ ಮತ್ತು ೭ರಂದು ನಡೆಯಿತು.

ಬಿ. ಜಿ. ಚಿದಂಬರ್ ರವರ ಅಧ್ಯಕ್ಷತೆಯಲ್ಲಿ ಹೆಚ್. ಜಿ. ಗೋವಿಂದೇಗೌಡರು ಮೇಳವನ್ನು ಉದ್ಘಾಟಿಸಿದರು. ಸಹಾಯಕ ವಿದ್ಯಾಧಿಕಾರಿ ಎಂ. ಚಂದ್ರಶೇಖರಯ್ಯ, ಜಿಲ್ಲಾ ಯುವಜನ ಸೇವಾಧಿಕಾರಿ ಹೆಚ್. ಆರ್. ಸುರೇಶ್, ಕೊಪ್ಪ ಸಹಾಯಕ ಕೃಷಿ ನಿರ್ದೇಶಕ ಎಂ. ಎಸ್. ಸುಬ್ಬೇಗೌಡ ಮುಖ್ಯ ಅತಿಥಿಗಳಾಗಿದ್ದರು.

ಫೆ. ೭ರಂದು ನಡೆದ ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಹಿರೇಕೊಡಿಗೆ ಗ್ರಾಮಪಂಚಾಯ್ತಿ ಅಧ್ಯಕ್ಷ ಎ. ಟಿ. ಲಿಂಗಪ್ಪ ನಾಯ್ಕರು ವಹಿಸಿದ್ದರು. ಕೊಪ್ಪ ಅರಣ್ಯ ವಿಭಾಗಾಧಿಕಾರಿ ಸುಂದರ ನಾಯ್ಕ ಬಹುಮಾನ ವಿತರಣೆ ಮಾಡಿದರು. ತಹಸೀಲ್ದಾರ್ ಹೆಚ್. ಎಂ. ನಾಗಪ್ಪ, ತಾ॥ ಯುವಜನ ಒಕ್ಕೂಟದ ಅಧ್ಯಕ್ಷ ಹೆಚ್. ಎಂ. ಶ್ರೀಧರ್, ಕ್ಷೇತ್ರಾಭಿವೃದ್ಧಿ ಅಧಿಕಾರಿ ಕೆ. ಬಾಲಣ್ಣಗೌಡ ಮುಖ್ಯ ಅತಿಥಿಗಳಾಗಿದ್ದರು.

ತಾ॥ಯುವಜನ ಒಕ್ಕೂಟದ ಕಾರ್ಯದರ್ಶಿ ಮಂಜುನಾಥ್ ಸ್ವಾಗತಿಸಿದರು. ಪ್ರೌಢ ಶಾಲಾ ಅಧ್ಯಾಪಕ ನಾಗಪ್ಪಗೌಡ ವಂದಿಸಿದರು.

ಒಟ್ಟು ೩೦೦ಕ್ಕೂ ಹೆಚ್ಚು ಯುವ ಜನರು ಭಾಗವಹಿಸಿದ್ದ ಮೇಳದಲ್ಲಿ ೧೩ ಯುವಕ ಸಂಘಗಳ ಮತ್ತು ೮ ಯುವತಿ/ಮಹಿಳಾ ಮಂಡಳಿಗಳ ೧೭೦ಕ್ಕೂ ಹೆಚ್ಚು ಸ್ಪರ್ಧಿಗಳು ವಿವಿಧ ಸಾಂಸ್ಕೃತಿಕ ಸ್ಪರ್ಧೆಗಳಲ್ಲಿ ಪಾಲುಗೊಂಡರು. ಯುವಕರ, ಯುವತಿಯರ ಮತ್ತು ಮಿಶ್ರ ವಿಭಾಗಗಳಲ್ಲಿ ೨೯ ಸ್ಪರ್ಧೆಗಳು ನಡೆದವು. ಒಟ್ಟು ೧೪ ಪಾಯಿಂಟ್ ಪಡೆದ ಹುಲಿಗರಡಿ ತರುಣ ರೈತ ಸಂಘದ ಬಿ. ಎಸ್. ನಾಗೇಶ್ ಹಾಗೂ ೨೦ ಪಾಯಿಂಟ್ ಪಡೆದ ಸಾರ್ವೆಯ ಶಾಂತಿ ವನಿತಾ ಸಮಾಜದ ಬಿ. ವಿ. ಗಾಯತ್ರಿ ವೈಯಕ್ತಿಕ ಪ್ರಶಸ್ತಿಗಳನ್ನು ಪಡೆದರು.

## ಇನ್ನೊಂದು ಅಂತರ್ಜಾತಿ ವಿವಾಹ

**ಕೊಪ್ಪ:** ಇಲ್ಲಿನ ಸಬ್ ರಿಜಿಸ್ಟ್ರಾರ್ ಸಮ್ಮುಖದಲ್ಲಿ ಫೆ. ೮ ರಂದು ಇನ್ನೊಂದು ಅಂತರ್ಜಾತಿ ವಿವಾಹ ನಡೆದಿರುವುದಾಗಿ ಗೊತ್ತಾಗಿದೆ. ಶಿವಮೊಗ್ಗದ ಅಕ್ಕಿ ಗಿರಣಿಯೊಂದರಲ್ಲಿ ನೌಕರನಾಗಿರುವ ನೇಪಾಳಿ ಭೀಮ್ ಬಹದ್ದೂರ್ ಹಾಗೂ ಕೊಪ್ಪ ಟೌನ್ ನಿವಾಸಿ ಸರಸ್ವತೀ ಬಾಯಿ ಇವರೇ ವಿವಾಹಿತರು. ಈ ಹಿಂದೆ ಜ. ೧೩ ರಂದು ಇಂಥದೇ ಒಂದು ವಿವಾಹ ನಡೆದಿತ್ತು.

### ಆರೋಗ್ಯ ಇಲಾಖೆ ನೌಕರ
## ಮಾರ್ಸೆಲ್ ಗಾಂ ನಿಧನ

ಕೊಪ್ಪ: ಇಲ್ಲಿನ ಸರ್ಕಾರಿ ಆಸ್ಪತ್ರೆಯಲ್ಲಿ ಸರ್ಜಿಕಲ್ ಅಟೆಂಡರ್ ಆಗಿದ್ದ ಮಾರ್ಸೆಲ್ ಗಾಂ ಅವರು ಫೆ ೧೦ರಂದು ನಿಧನರಾದರು. ಅವರಿಗೆ ೪೮ ವರ್ಷ ವಯಸ್ಸಾಗಿತ್ತು. ಇಲಾಖೆಯಲ್ಲಿ ೨೩ ವರ್ಷ ಸೇವೆ ಸಲ್ಲಿಸಿದ್ದರು.

ಇಲಾಖೆಯಲ್ಲಿ ಒಳ್ಳೆ ನಿಪುಣ ಕೆಲಸಗಾರನೆಂಬ ಖ್ಯಾತಿ ಪಡೆದಿದ್ದ ಅವರು ಊರಿನಲ್ಲೂ ಜನಪ್ರಿಯರಾಗಿದ್ದರು.

ವಯಸ್ಸಾದ ತಾಯಿ ಹಾಗೂ ೩ ಗಂಡು ಮತ್ತು ೨ ಹೆಣ್ಣು ಮಕ್ಕಳನ್ನು ಅವರು ಅಗಲಿದ್ದಾರೆ. ಆಸ್ಪತ್ರೆ ಸಿಬ್ಬಂದಿ ಫೆ. ೧೧ ರಂದು ಮೃತರ ಗೌರವಾರ್ಥ ಸಂತಾಪ ಸೂಚಕ ಸಭೆ ನಡೆಸಿದರು.

## ರಾಜ್ಯಮಟ್ಟದ ಚರ್ಚಾಸ್ಪರ್ಧೆಯಲ್ಲಿ ಶೃಂಗೇರಿ ಪ್ರೌಢಶಾಲೆಗೆ ಪರ್ಯಾಯ ಫಲಕ

ಶೃಂಗೇರಿ: ಆಲ್ದೂರಿನಲ್ಲಿ ಜ. ೨೧ರಂದು ನಡೆದ ರಾಜ್ಯಮಟ್ಟದ ಕನ್ನಡ ಚರ್ಚಾ ಸ್ಪರ್ಧೆಯಲ್ಲಿ ಭಾಗವಹಿಸಿದ್ದ ಶೃಂಗೇರಿ ಸರ್ಕಾರಿ ಪ್ರೌಢಶಾಲೆಯ ಕೆ. ಪ್ರಸನ್ನ ಮೊದಲ ಬಹುಮಾನವನ್ನೂ, ಎಸ್. ವೀಣಾ ಎರಡನೇ ಬಹುಮಾನವನ್ನೂ ಗಳಿಸಿ ಶಾಲೆಗೆ ಪರ್ಯಾಯ ಫಲಕವನ್ನು ಗೆದ್ದು ತಂದಿದ್ದಾರೆಂದು ಮುಖ್ಯೋಪಾಧ್ಯಾಯರು "ದೀಪಟಿಗ"ಗೆ ತಿಳಿಸಿದ್ದಾರೆ.

## ವಾರ್ಷಿಕೋತ್ಸವಗಳು

### ಶೃಂಗೇರಿ ಬಾಲಿಕಾ ಪ್ರೌಢಶಾಲೆ

ಇಲ್ಲಿನ ಜಗದ್ಗುರು ಅಭಿನವ ವಿದ್ಯಾತೀರ್ಥ ಬಾಲಿಕಾ ಪ್ರೌಢಶಾಲೆಯ ವಾರ್ಷಿಕೋತ್ಸವ ಫೆ. ೫ರಂದು ನಡೆಯಿತು.

ಜೆ. ಸಿ. ಬಿ. ಎಂ. ಕಾಲೇಜಿನ ಪ್ರಿನ್ಸಿಪಾಲ್ ಎಂ. ಕೃಷ್ಣಪ್ಪಯ್ಯ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಸ್ಥಳೀಯ ವಕೀಲ ಟಿ. ಎನ್. ಕೃಷ್ಣಭಟ್ಟ ಮುಖ್ಯ ಅತಿಥಿಗಳಾಗಿದ್ದರು. ಮಹಿಳಾ ವೈದ್ಯಾಧಿಕಾರಿ ಡಾ. ಜಯಲಕ್ಷ್ಮಿ ವಿ. ಹೇರಳೆ ಬಹುಮಾನ ವಿತರಣೆ ಮಾಡಿದರು.

### ಬಾಳಗಡಿ ಹಿ. ಪ್ರಾ. ಶಾಲೆ

ಬಾಳಗಡಿ ಮಾದರಿ ಹಿರಿಯಪ್ರಾಥಮಿಕ ಶಾಲೆಯ ವಿದ್ಯಾರ್ಥಿ ಸರ್ಕಾರದ ವಾರ್ಷಿಕೋತ್ಸವ ಫೆ. ೧೨ರಂದು ಪಿ. ಜಿ. ಗುರ್ಜರ್ ರವರ ಅಧ್ಯಕ್ಷತೆಯಲ್ಲಿ ನಡೆಯಿತು. ತಹಸೀಲ್ದಾರ್ ಹೆಚ್. ಎಂ. ನಾಗಪ್ಪ ಮುಖ್ಯ ಅತಿಥಿಗಳಾಗಿದ್ದರು. ಸಹಾಯಕ ವಿದ್ಯಾಧಿಕಾರಿ ಎಂ. ಚಂದ್ರಶೇಖರಯ್ಯ ಬಹುಮಾನ ವಿತರಣೆ ಮಾಡಿದರು.

ಶಾಲೆಯ ಮಕ್ಕಳು 'ಪರಾರಿ' ಮತ್ತು 'ಶ್ರೀ ರಾಮಾಶ್ವಮೇಧ' ಎಂಬ ನಾಟಕಗಳನ್ನು ಅಭಿನಯಿಸಿದರು.

### ವಿದ್ಯಾ ಮಹಿಳಾ ಸಮಾಜ

ಬಾಳಗಡಿಯ ವಿದ್ಯಾ ಮಹಿಳಾ ಸಮಾಜದ ವಾರ್ಷಿಕೋತ್ಸವ ಫೆ. ೧೩ ರಂದು ನಡೆಯಿತು. ರೋಹಿಣಿ ವೆಂಕಟೇಶ್ ಭಟ್ ಅಧ್ಯಕ್ಷತೆ ವಹಿಸಿದ್ದರು. ವಿವಿಧ ಸ್ಪರ್ಧೆಗಳಲ್ಲಿ ಗೆದ್ದವರಿಗೆ ಜಯಂತಿ ಮೋಹನ್ ಶೆಟ್ಟಿ ಬಹುಮಾನ ಹಂಚಿದರು. ಮಾ. ಹಿ. ಪ್ರಾ. ಶಾಲೆಯ ಮುಖ್ಯೋಪಾಧ್ಯಾಯರಾದ ಆರ್. ಕೃಷ್ಣಶೆಟ್ಟಿ ಮುಕ್ತಾಯ ಭಾಷಣ ಮಾಡಿದರು.

ಸಮಾಜದ ಸದಸ್ಯೆಯರು 'ವರದಕ್ಷಿಣೆ' ಎಂಬ ನಾಟಕವನ್ನೂ, 'ರಂಗಶ್ರೀ' ಕಲಾವಿದರು 'ಎಲ್.ಬಿ. ಡಬ್ಲ್ಯೂ'ಎಂಬ ನಾಟಕವನ್ನೂ ಅಭಿನಯಿಸಿದರು.

**ಅರಣ್ಯಗಳ ಉಪ ಸಂರಕ್ಷಣಾಧಿಕಾರಿಗಳ ಕಛೇರಿ**
**ಕೊಪ್ಪ ವಿಭಾಗ, ಕೊಪ್ಪ.**

# ಸಂಕ್ಷಿಪ್ತ ಪ್ರಕಟಣೆ

ನಂಬರ್:– ಟಿ.ಬಿ.ಆರ್ – ಎಸ್. ಎ ಎಸ್. 4/81–82 ದಿನಾಂಕ 29.1.82

**ವಿಷಯ:** ಕೊಪ್ಪ ಅರಣ್ಯ ವಿಭಾಗದಲ್ಲಿ ಟಿಂಬರ್ ಹರಾಜು ಬಗ್ಗೆ

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಕೊಪ್ಪ ಅರಣ್ಯ ವಿಭಾಗದ ಈ ಕೆಳಕಂಡ ನಾಟಾ ಸಂಗ್ರಹಾಲಯಗಳಲ್ಲಿ ಇರತಕ್ಕ ನಾಟಾಗಳನ್ನು ಹಾಗೂ ಇತರೆ ಅರಣ್ಯ ಉತ್ಪನ್ನಗಳನ್ನು ಅರಣ್ಯ ಉಪಸಂರಕ್ಷಣಾಧಿಕಾರಿ ಅಥವಾ ಅವರಿಂದ ಅಧಿಕಾರ ಪಡೆದ ಇತರೆಯವರಾಗಲಿ, ಬಹಿರಂಗ ಹರಾಜು ಮೂಲಕ ಮಾರಾಟ ಮಾಡುವರು. ಮಾರಾಟ ಪ್ರತಿದಿನ ಬೆಳಿಗ್ಗೆ 9.30ಕ್ಕೆ ಆರಂಭವಾಗುತ್ತದೆ.

1) ಇಚ್ಛೆಯುಳ್ಳ ಬಿಡ್ಡುದಾರರು ಮಾರಾಟ ನಡೆಸುವ ಅಧಿಕಾರಿಯೊಂದಿಗೆ ಕನಿಷ್ಠ 500 ರೂಗಳನ್ನು ಠೇವಣಿಸಬೇಕು.
2) ಕೊಳ್ಳುವುದರಲ್ಲಿ ಯಶಸ್ವಿಯಾದ ವ್ಯಕ್ತಿಯು ಮಾರಾಟವಾದ ವಸ್ತುವಿನ ಮೌಲ್ಯದ ಶೇ. 25 ಭಾಗ ಹಣವನ್ನು ಶೇ. 4 ಮಾರಾಟ ತೆರಿಗೆ ಶೇ. 8 ರಷ್ಟು ಅರಣ್ಯ ಅಭಿವೃದ್ಧಿ ತೆರಿಗೆ ಎಸ್.ಸಿ. ಶೇ. 10 ರಷ್ಟು ಎಸ್. ಟಿ.ಯ ಮೇಲೆ ಮತ್ತು ಶೇ. 0.5 ಟಿ.ಓ.ಟಿಯನ್ನು ಮಾರಾಟ ಮುಗಿದ ನಂತರ ಪಾವತಿಸಬೇಕು. ತಪ್ಪಿದಲ್ಲಿ ಮಾರಾಟ ರದ್ದುಗೊಳಿಸಿ ಠೇವಣಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಗರಿಷ್ಠ ದರ ಸೂಚಿಸಿದ ಬಿಡ್‌ದಾರನ ಜವಾಬ್ದಾರಿಯ ಮೇಲೆ ಮತ್ತು ಖರ್ಚಿನಲ್ಲಿ ಮುಂದಿನ ಮಾರಾಟದಲ್ಲಿ ಮರು ಹರಾಜು ಮಾಡಲಾಗುವುದು.
3) ನಾಟಾ ಮತ್ತು ಇತರ ಅರಣ್ಯ ಉತ್ಪನ್ನಗಳ ಬಿಡ್ಡುದಾರರು ಸಂಬಂಧಪಟ್ಟ ಮಾರ್ಕೆಟಿಂಗ್ ಆಫೀಸರ್ ಅವರಿಂದ ಲೈಸೆನ್ಸ್ ಪಡೆದು ಕೊಂಡಿರತಕ್ಕದ್ದು.
4) ಮಾರಾಟದ ವಿವರವಾದ ನಿಯಮ ಮತ್ತು ಶರತ್ತುಗಳನ್ನು ಅರಣ್ಯಗಳ ಉಪಸಂರಕ್ಷಣಾಧಿಕಾರಿಗಳು ಅಥವಾ ಸಂಬಂಧಿಸಿದ ಡಿಪೋ ಅಧಿಕಾರಿಗಳಲ್ಲಿ ಕಾರ್ಯಾಲಯದ ವೇಳೆಯಲ್ಲಿ ಪಡೆಯ ಬಹುದು.

## ಷೆಡ್ಯೂಲು

| ಕ್ರಮ ಸಂಖ್ಯೆ. | ಡಿಪೋ ಹೆಸರು | ಮಾರಾಟ ದಿನಾಂಕ | | ಟಿಂಬರ್ ಮತ್ತು ಅರಣ್ಯ ಉತ್ಪನ್ನದ ಅಂದಾಜು ಪ್ರಮಾಣ. |
|---|---|---|---|---|
| 1 | ಸರ್ಕಾರಿ ನಾಟಾ ಡಿಪೋ ನರಸಿಂಹರಾಜಪುರ | 16-2-82 ಮತ್ತು 17–2–82 | ಬೀಟೆ | 82.000ಘ.ಮೀ. |
| | | | ಸಾಗುವಾನಿ | 9.000ಘ.ಮೀ. |
| | | | ಹೊನ್ನೆ | 62.000ಘ.ಮೀ. |
| | | | ಮತ್ತಿ | 109.000ಘ.ಮೀ. |
| | | | ಎತ್ತೆಗ | 142.000ಘ.ಮೀ. |
| | | | ಇತರೆ ವಿಧ | 868.000ಘ.ಮೀ. |
| | | | ಸಾಗುವಾನಿ ಪೋಲ್ಸ್ | 3800 |
| | | | ಕಾಡುಜಾತಿ ಪೋಲ್ಸ್ | 1500 |
| | ಬಾಳೆಹೊನ್ನೂರು ವಲಯ | | | |
| 2 | ಸರ್ಕಾರಿ ನಾಟಾ ಡಿಪೋ ಸಂಗಮೇಶ್ವರ ಪೇಟೆ | 5–3–82 | ಬೀಟೆ | 32.000ಘ.ಮೀ. |
| | | | ಹೊನ್ನೆ | 2.000ಘ.ಮೀ. |
| | | | ನಂದಿ | 4.000ಘ.ಮೀ. |
| | | | ಮತ್ತಿ | 16.000ಘ.ಮೀ. |
| | | | ಇತರೆ ವಿಧ | 36.000ಘ.ಮೀ. |
| | | | ಸಾಗುವಾನಿ ಪೋಲ್ಸ್ | 15000. |
| | | | ಡಿಟೋ ಬಲ್ಲಿಸ್ | 450. |
| 3 | ಭಗವತಿ ಟೆಂಕೆ ಡಿಪೋ ಕಳಸ ವಲಯ | 6–3–82 | ಬಲ್ಗಿ | 98.000ಘ.ಮೀ. |
| | | | ಪೈಗ | 16.000ಘ.ಮೀ. |
| | | | ಇತರೆ ವಿಧ | 17.000ಘ.ಮೀ. |

(ಸಹಿ) ಕೆ.ಸುಂದರ ನಾಯಕ್,
ಅರಣ್ಯಗಳ ಉಪಸಂರಕ್ಷಣಾಧಿಕಾರಿ,
ಕೊಪ್ಪ ವಿಭಾಗ, ಕೊಪ್ಪ.

ಸಂಪಾದಕ, ಪ್ರಕಾಶಕ ಮತ್ತು ಮುದ್ರಕ: ಸಿರಿಮನೆ ನಾಗರಾಜ್. ಅಚ್ಚು: ನೇಸರ ಮುದ್ರಣ, ಕೊಪ್ಪ.